

# ಕರುಣಾಳು

ಕವನ ಸಂಕಲನ

ಸವಿತಾ ನಾಗಭೂಷಣ



ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ

*Karunaalu:* (Kannada) Collection of poems by Savitha Nagabhushana; HIG-5, 'Nudi', Kallahalli, Vinoba Nagar, Shimoga 577204 (Ph: 94813-51079).
Published by Akshara Prakashana, Heggodu, Sagara, Karnataka 577 417.
First Edition: 2016


Pages: 50, Paper: 70gsm, N. S. bookprint, Size: Crown 1/8.



**ಬೆಲೆ : ರೂಪಾಯಿ ಐವತ್ತೈದು**
ಅಕ್ಷರ ಜೋಡಣೆ: ಅಕ್ಷರ ಗಣಕ, ಹೆಗ್ಗೋಡು
ಮುದ್ರಣ: ಸ್ವ್ಯಾನ್ ಪ್ರಿಂಟರ್ಸ್, ಬೆಂಗಳೂರು



**ಅರ್ಪಣೆ**

ಅಕ್ಕ–ತಂಗಿಯರಾದ

**ವಿಜಯಾ, ಸುಚಿತ್ರಾ, ಸುಮನಾ**
**ಸುಪ್ರಿಯಾ, ಸುಚರಿತಾ**

ಇವರಿಗೆ

## ಕೃತಜ್ಞತೆ

ಕವನಗಳ ಮೊದಲ ಓದುಗರಾದ ಸಂಗಾತಿ ಡಿ.ಎಸ್. ನಾಗಭೂಷಣ ಇವರಿಗೆ,

ಸದಾ ಒಳ್ಳೆಯ ಮಾತುಗಳನ್ನಾಡಿ ಪ್ರೋತ್ಸಾಹಿಸುವ ಎಲ್ಲ ಗೆಳೆಯ ಗೆಳತಿಯರಿಗೆ,

ಪತ್ರಿಕೆಗಳಲ್ಲಿ/ಫೇಸ್‌ಬುಕ್/ವಾಟ್ಸಾಪ್ ಗಳಲ್ಲಿ ಓದಿ ಮಿಡಿದ ಅಸಂಖ್ಯ ಓದುಗರಿಗೆ, ಬಂಧು-ಬಳಗಕ್ಕೆ,

ಇಲ್ಲಿನ ಕವನಗಳನ್ನು ಮೊದಲು ಪ್ರಕಟಿಸಿದ ಪತ್ರಿಕೆ/ನಿಯತಕಾಲಿಕೆಗಳ ಸಂಪಾದಕರುಗಳಿಗೆ,

ಪ್ರಕಟಿಸುತ್ತಿರುವ ಅಕ್ಷರ ಪ್ರಕಾಶನ, ಹೆಗ್ಗೋಡು-ಇವರಿಗೆ.

**ಸವಿತಾ ನಾಗಭೂಷಣ**

ಮೇ ೨೦೧೬





## ಎರಡು ಮಾತು

ನನ್ನ ಮನೆ ಮಾತು ಕೊಂಕಣಿ. ನಾವು ಬಾಲ್ಯದಲ್ಲಿ ಮಕ್ಕಳು ಕನ್ನಡದಲ್ಲಿಯೇ ವ್ಯವಹರಿಸುತ್ತಿರುವಾಗ ನನ್ನ ಅಜ್ಜಿ ಗದರುತ್ತಿದ್ದರು. 'ನಮಗೆ ದೇವರು ಕೊಟ್ಟ ಭಾಷೆ ಕೊಂಕಣಿ. ನಾವು ಕೊಂಕಣಿಯನ್ನೇ ಮಾತನಾಡಬೇಕು. ಕನ್ನಡವೇನಿದ್ದರೂ ಹೊಸಿಲಾಚೆ' ಎನ್ನುವರು. ಆದರೂ ನಾವು ಮಕ್ಕಳು ಕನ್ನಡದಲ್ಲಿಯೇ ಗುದ್ದಾಡಿಕೊಂಡು ಅಪ್ಪ-ಅಮ್ಮ-ಅಜ್ಜಿಯ ಜೊತೆ ಮಾತ್ರ ವಿಧೇಯರಾಗಿ ಕೊಂಕಣಿ ಮಾತಾಡುತ್ತಿದ್ದೆವು.

ಕೊಂಕಣಿಗೆ ಲಿಪಿ ಇಲ್ಲ. ಹಾಗಾಗಿ ನಾನು ಕನ್ನಡದಲ್ಲಿ ಬರೆದೆನೋ ಏನೋ! ತಾಯಿ ಎದೆಹಾಲು ಕುಡಿದ ಮಕ್ಕಳು ಗಟ್ಟಿಮುಟ್ಟಾಗಿ ಬೆಳೆದು ಲೋಕವನ್ನೇ ಜಯಿಸುವರಂತೆ! ನನಗೋ ಎರಡು ಜೊತೆ ಮೊಲೆವಾಲು-ಕೊಂಕಣಿ ಮತ್ತು ಕನ್ನಡ. ಕುಡಿದು ಬೆಳೆವ ಭಾಗ್ಯ. ಅಂತಃಕರಣ ನೀಡಿದ ಕೊಂಕಣಿ, ಲೋಕದೃಷ್ಟಿ ದಯಪಾಲಿಸಿದ ಕನ್ನಡವ ಬೆಸೆದು ಹಿಂದಣ ಹಿರಿಯರು ಪುರಂದರ-ಕನಕ-ಬಸವ-ಅಕ್ಕ ಇವರ ಹಾದಿಯಲ್ಲಿ ತಿಪ್ಪ ತಿಪ್ಪ ಹೆಜ್ಜೆಗಳನ್ನು ಇಟ್ಟಿರುವೆ.

ಕವಿತೆ ನಿಷ್ಕಪಟಿ, ಕಳಂಕರಹಿತವಾದದ್ದು ಹಾಗೂ ಕೇಡಿಲ್ಲದ್ದು. ನನ್ನ ಪಾಲಿನ ವ್ರತ, ಪೂಜೆ, ಧ್ಯಾನ ಎಲ್ಲವೂ ಅದೇ. ಅದು ಸದಾ ನನ್ನ ಜತೆಯಲ್ಲಿರಲಿ ಎಂದು ಹಂಬಲಿಸುತ್ತಾ ಈ 'ಕರುಣಾಳು' ಸಂಗ್ರಹವನ್ನು ಓದುಗರ ಮುಂದಿಡುತ್ತಿದ್ದೇನೆ.

ಶಿವಮೊಗ್ಗ

ಸವಿತಾ ನಾಗಭೂಷಣ

# ಪರಿವಿಡಿ







## ೧. ಹೂವಮ್ಮ ಮತ್ತು ಕೆಂಪಣ್ಣ

ಲೋಕದ ಚೇಷ್ಟೆಗೆ
ಅವ್ನೇ ಬೀಜ ಕಣೇ ಅಂತ
ಅಕ್ಕ ಹೇಳಿದ್ಳು, ತಂಗಿ ಕೇಳಿದ್ಳು.

ಅದೋ ಅಲ್ಲಿ ಇದಾನಲ್ಲ
ಕೆಂಪಣ್ಣ ಅವ್ನೇ ಅವ್ನೇ... ಅಂತ
ಒಂದು ಮುಂಜಾನೆ ಅಕ್ಕ ತೋರಿದ್ಳು
ತಂಗಿ ನೋಡಿದ್ಳು.

ನೋಡ್ತಾ... ನೋಡ್ತಾ... ನೋಡ್ತಾನೇ
ಅದೆಷ್ಟು ದಿನಗೋಳು... ನೋಡ್ತಾನೇ ಅವ್ಳೆ
ದುರುದುರು ಅಂತ ಕಣ್ಣಲ್ಲಿ ಕಣ್ಣಿಟ್ಟು
ಬೆಂಕಿಯಂತ ಬೆಂಕಿಗೆ ಮುತ್ತಿಟ್ಟು
ಬಿದ್ದೂ ಎದ್ದೂ, ಎದ್ದೂ ಬಿದ್ದೂ
ಅದೆಷ್ಟು ದಿನಗೋಳೋ
ತಂಜೀವಾನೇ ಒತ್ತೆಯಿಟ್ಳು...

ಅವ್ನು ಸಿಗಲ್ಲ ಇವ್ಳು ಬಿಡಲ್ಲ
ಕೆಂಪಣ್ಣ ಬೆಳಗ್ತಾನೇ ಅವ್ನೆ
ಹೂವಮ್ಮ ಅರಳ್ತಾನೇ ಅವ್ಳೆ...

## ೨. ಹಕ್ಕಿಗಳ ಹಾಡು

ಕತ್ಲು ಹರಿಯೋ ಹೊತ್ಗೆ...

ಚಿಕ್ ಚಿಕ್ ಚಿಂವ್ ಚಿಂವ್
ರೀಂ ರೀಂ ಪೀಂವ್ ಪೀಂವ್
ಉಮ್ ಉಮ್ ಟ್ರಿಂ ಟ್ರಿಂ
ಟಿಟಿರ್ ಟಿಟಿರ್ ಕುಟುರ್ ಕುಟುರ್
ಜಿರೇಂ ಜಿರೇಂ ಹ್ರೂಂ ಹ್ರೂಂ
ಇಕಾವ್ ಇಕಾವ್ ರೇಕ್ ರೇಕ್
ಕೂ...ಹೂ...ಕು...ಹೂ...

ಒಂದಲ್ಲ ಎರಡಲ್ಲ ಮೂರಲ್ಲ
ಹಕ್ಕಿಗಳು ಹಾಡ್ತಾ ಇವೆ
ರೆಂಬೆಯಿಂದ ಕೊಂಬೆಗೆ
ಸ್ವರ ಜಿಗಿದು ಓಡ್ತಾ ಇವೆ!

ಕಿವಿಗೆ ಕೇಳ್ತಾ ಇದೆ
ಏನೂಂಥ ಗೊತ್ತಾಗ್ತಾ ಇಲ್ವೆ?
ಕಿವಿಗೆ ಕೇಳ್ತಾ ಇದೆ
ಅರ್ಥ ಆಗ್ತಾ ಇಲ್ಲವೆ?
ಭಾಷೆ ಬರ್ದಿದ್ರೆ ಎಷ್ಟು ಕಷ್ಟ ಕಷ್ಟ!
ಅಯ್ಯೋ... ಎಷ್ಟು ನಷ್ಟ ನಷ್ಟ!



ಓಹೋ ಗೊತ್ತಾಯ್ತು!
ಚಿಕ್ ಚಿಕ್ ಚಿಂವ್ ಚಿಂವ್
ಅದೇನೇ ಭಾಷೆ ಅಲ್ವೇ?
ಆಂ... ಉಂ......ಊಂ...
ನನ್ನೀ ಅಳು, ಗೋಳು
ಅದೂನೂ ಭಾಷೆ ಅಲ್ವೆ?

ತಿಳೀತಾ ಇದೆ... ಹೊಳೀತಾ ಇದೆ...
ಏನೋ ಒಂಚೂರು ಎದೆ ಮುಟ್ತಾ ಇದೆ
ಚೂರು ಪಾರು ತಟ್ತಾ ಇದೆ...

## ೩. ಗ್ಯಾನ ಇದ್ರೆ ತಾನೆ?

ಜೀವ ಕುದೀತಾ ಇದೆ
ಎದೆ ಉಕ್ತಾ ಇದೆ
ಪದ್ಯ ದಕ್ತಾ ಇದೆ...

ಹಾಲು ಕುದೀತಾ ಇದೆ
ಹಾಲು ಉಕ್ತಾ ಇದೆ
ಹಾಲು ಸೀಯ್ತಾ ಇದೆ
ಕರಕಲು ವಾಸನೆ...
ನೆನಪಿದ್ರೆ ತಾನೆ?
ತನ್ನೊಳಗೆ ತಾನೆ!

ಗ್ಯಾನ ಇಲ್ವೇನೆ?
ಇದೇನು ಮನೇನೋ ಅಥವಾ...?
ದೇವ್ರೇ...
ಒಂದು ಲೀಟರ್ ಹಾಲು
ಪೂರಾ ಕಟ್ಟೆ ಪಾಲು...

ಕರಕರಾಂತ ಪಾತ್ರೆ ಕೆರೆದು
ಕೈ ಸೋಲ್ತಾ ಇದೆ
ಕಟ್ಟೆ ಒರೆಸಿ ಒರೆಸಿ ಕೈ ನೋಯ್ತಾ ಇದೆ





ಮನೆಮಂದಿಯ ಬೈಗುಳ ಬೇರೆ...
ದುಃಖ ಉಕ್ಕಿ ಬರ್ತಾ ಇದೆ
ಬೆಕ್ಕು ಕಾಲು ನೆಕ್ತಾ ಇದೆ
ಮಗು ಬೆರಳು ಚೀಪ್ತಾ ಇದೆ
ಒಂತೊಟ್ಟೂ ಹಾಲು ಇಲ್ವೇ!

ಗೋಳಾಡ್ತಾ ಹಾಲಿಗೆ ಹೊರಟ್ರೆ
ತಲೆ ಘಿಂ ಅಂತಾ ಇದೆ

ಒಂದು ಲೀಟರ್ ಹಾಲು...
ದರಿದ್ರ ಎದುರಿಗೇ ಇದ್ದೆ!
ಸೊಕ್ಕೆಷ್ಟಿರಬೇಕು?
ಸೊಕ್ಕು... ಸೊಕ್ಕು...
ಅದಕ್ಕೇ ಉಕ್ಕು...
ಉಕ್ತಾ ಇದ್ರೂ ಗೊತ್ತೇ ಆಗಲಿಲ್ವೆ!

ಬೈಕೊಂಡ್ ಬೈಕೊಂಡ್
ಹಾಲು ತಂದು ಒಲೆ ಮೇಲಿಟ್ಟು
ಸಿಟ್ಟಿಂದ ಬೆಂಕಿಕೊಟ್ಟು
ಕಣ್ಣನ್ನ ಅದರಲ್ಲೇ ನೆಟ್ಟು
ನಿಂತೇ ಇದ್ದೆ!

ಜೀವ ಕುದೀತಾ ಇದೆ
ಪದ್ಯ ಉಕ್ತಾ ಇದೆ
ಪದ್ಯ ಸೀಯ್ತಾ ಇದೆ
ಗ್ಯಾನ ಇದ್ರೆ ತಾನೆ!

## ೪. ಅವ್ವನಿಗೆ...

ಹುಲಿ ಮ್ಯಾಲೆ ಕುಂತವಳೆ
ನಂಗೆ ಭಯ!
ದುರು ದುರು ಅಂತ ನೋಡ್ತಾಳೆ
ನಂಗೆ ಭಯ!
ನಾಲ್ಗೆ ಚಾಚಿ ಬೆಚ್ಚಿ ಬೀಳಸ್ತಾಳೆ
ನಂಗೆ ಭಯ!
ತ್ರಿಶೂಲ ಬೇರೆ ಅದೆ
ನಂಗೆ ಭಯ!

ನನ್ನ ಎತ್ಕೊ...
ಬಾಚಿ ತಬ್ಕೋ
ಅಂತ ಕೇಳೋಕೂ ಭಯ!

ಅದ್ರೂನೂ ಕೇಳ್ತೀನಿ
ಅವ್ವಾ ನಾ ನಿನ್ನ ಕೂಸು
ಒಮ್ಮೆ ಎತ್ಕೋ
ಒಂದೇ ಒಂದು ಸಲ
ನಿನ್ನ ಎದೆಗೆ ಒತ್ಕೋ...

ನಿನ್ನ ಹೆಗಲ ಮೇಲೆ ಹಾಕ್ಕೋ
ನಾ ಮಲಗ್ತೀನಿ
ಒಂದು ಮುತ್ಕೊಡು ಸಾಕು
ಜೀವಾನೇ ಬಿಡ್ತೀನಿ!



## ೫. ಪಾತ್ರ

ಕೊಡುವುದಾದರೆ ಕೊಡಿ
ಸಮುದ್ರ ದಂಡೆಯ ಪಾತ್ರ
ಇಲ್ಲಾ...
ಹಾಡು ಹಕ್ಕಿಯ ಪಾತ್ರ
ಅಥವಾ
ದೊಡ್ಡ ಹೆಬ್ಬಂಡೆ, ಹೂವಿನ ಪಾತ್ರ
ಪುಟ್ಟ ತೊರೆ ಇಲ್ಲವೇ
ತೂಗಿ ಬಾಗಿ ಬಳುಕುವ ಬಳ್ಳಿಯ ಪಾತ್ರ

ಬೆದರು ಬೊಂಬೆಯ ಪಾತ್ರ?
ಹೂಂ... ಅದೂ ಆದೀತು

ಹಾಂ...
ಮೂಲೆಗೆ ಬಾಯ್ದೆರೆದು ಕುಂತಿರುವ
ಹಿತ್ತಾಳೆ ಹಂಡೆಯ ಪಾತ್ರ
ಅದೇ... ಅದೇ... ಸರಿಯಾದದ್ದು!

ನಾನು ಕೇಳುವುದಿಷ್ಟೇ
ಕೊಡಿ ಒಂದು ಘನವಾದ ಪಾತ್ರ

ಇನ್ನೆಷ್ಟು ದಿನ?
ಪಾತ್ರವೇ ಆಗಿಬಿಡುವೆ
ನಟಿಸಲಾರೆ...

## ೬. ಧಂ ಧಮಾಕಾ ಸೇಲ್

ಸೇಲ್ ಸೇಲ್ ಸೇಲ್!
ಧಂ ಧಮಾಕಾ ಸೇಲ್!

ಕಾಸು ಕೋಡೋದೇ ಬೇಡ
ಕಾರು ಕೊಡ್ತಾರಂತೆ

ಕಂತು ಕೊಟ್ರೆ ಸಾಕು
ಮನೆ ಕೊಡ್ತಾರಂತೆ

ಚಿನ್ನ ಬೆಳ್ಳಿ ವಜ್ರ
ಸಸ್ತಾ ಸಸ್ತಾ ಅಂತೆ
ಬಟ್ಟೆ ಪಾತ್ರ ಪಡಗ
ಪೂರಾ ಡಿಸ್ಕೌಂಟಂತೆ

ಸೇಲ್ ಸೇಲ್ ಸೇಲ್!
ಧಂ ಧಮಾಕಾ ಸೇಲ್!





ಪೇಟೆ ತುಂಬಾ ಸುಗ್ಗಿ
ಏಳೋ ಬೀಳೋ ಮಗ್ಗಿ
ನಡೆ ಹಿಗ್ಗೀ ಹಿಗ್ಗೀ
ನುಡಿ ತಗ್ಗಿ ಬಗ್ಗಿ

ನೀರೂ ಸೇಲ್ ಮಣ್ಣೂ ಸೇಲ್
ಕಾಡೂ ಸೇಲ್ ನಾಡೂ ಸೇಲ್
ದೇವರು ದಿಂಡರು ಧರ್ಮ
ಶಾಸ್ತ್ರ ಪುರಾಣ ಕರ್ಮ
ಭರ್ಜರಿ ಡೀಲ್ ಹೋಲ್‌ಸೇಲ್

ಬಾಳೂ ಬದುಕು ಅಗ್ಗ
ಶಾಪಿಂಗ್ ಮಾಲೇ ಸಗ್ಗ
ಜಗ್ಗ ಮಗ್ಗ ಜಗ್ಗ
ಧಂ ಧಮಾಕಾ ಸೇಲ್
ಇದುವೇ ಆಜ್ ಕಾ ಖೇಲ್

## ೭. ಏನು ಮಾಡ್ಲಿ? ಎಲ್ಲ ಸುಡ್ಲಿ!

ಯಾವ ಒಡವೆ ತೊಟ್ಕೊಳ್ಳಿ?
ಯಾವ ಬಟ್ಟೆ ಹಾಕ್ಕೊಳ್ಳಿ?
ಯಾವ ಚಪ್ಲಿ ಮೆಟ್ಕೊಳ್ಳಿ?
ಏನ್ ತಿನ್ಲಿ? ಏನ್ ಕುಡೀಲಿ?
ಏನ್ ನೋಡ್ಲಿ? ಏನ್ ಹಾಡ್ಲಿ?

ಕಿವಿಗೇನೋ ಕೇಳಿಸ್ತಾ ಇದೆ
ಕಣ್ಣೇನೋ ನೋಡ್ತಾ ಇದೆ
ಕೈಯೇನೋ ಹುಡುಕ್ತಾ ಇದೆ
ಕಾಲ್ಗೇನೋ ತಾಗ್ತಾ ಇದೆ
ಮೈಯೇನೋ ಬಯಸ್ತಾ ಇದೆ
ಮನಸ್ಸೆಲ್ಲೋ ಹಾರ್‍ತಾ ಇದೆ!
ಗಡದ್ದು ಮಲಗ್ಬೇಕು
ಕನಸು ಬೀಳ್ಬೇಕು
ಟೈಂ ಇಲ್ವೇ?
ಕಾಸಿದ್ರೂ ಕಾಲ ಇಲ್ವೇ?

ಏನೋ ಕುದೀತಾ ಇದೆ
ಎನೋ ಒದಿತಾ ಇದೆ
ಹೇಳೋಕೂ ತೋಚೊಲ್ಲ
ತಾಳೋಕೂ ಆಗೊಲ್ಲ.

ಬಣ್ಣ ಕಣ್ಣು ಕುಕ್ತಾ ಇದೆ
ಬೆಡಗು ನನ್ನ ಮುಕ್ತಾ ಇದೆ
ಏನ್ ಮಾಡ್ಲಿ?
ಎಲ್ಲ ಸುಡ್ಲಿ!





## ೮. ಕನ್ನಡ ಪದ

ಕನ್ನಡ ಪದವೊಂದ ನೀಡುವೆನು ನಾನಿಂದು
ತಾ ಎಂದು ಪಡೆದವರ ಕಾಣುವೆನು ನಾನಿಂದು ಕಂದನೆಂದು
ನಾನೊಂದು ಪದವೊಂದ ನೀಡುವೆನು ನಿಮಗಿಂದು
ತಾ ಎಂದು ಪಡೆದವರ ಕಾಣುವೆನು ನಾನಿಂದು ಬಂಧುವೆಂದು
ನಾ ನೊಂದ ಪದವೊಂದ ನೀಡುವೆನು ನಿಮಗಿಂದು
ತಾ ಎಂದು ಪಡೆದವರ ಕಾಣುವೆನು ನಾನಿಂದು ಬಳಗವೆಂದು

ತುಂಗೆಯಲಿ ಮಿಂದಿರುವ ಭದ್ರೆಯನು ಬೆಳಗಿರುವ
ಬುಡನಗಿರಿಯನು ಏರಿ ಬ್ರಹ್ಮಗಿರಿಯಲಿ ಜಾರಿ
ಕೇದಗೆಯ ಕಂಪಿಂದ ಮಾಮರದ ಇಂಪಿಂದ
ಜಾಜಿ ಮಲ್ಲಿಗೆ ಹಿರಿದು ಸುರಗಿ ಹೊನ್ನೆಯ ಸುರಿದು
ಚೆನ್ನುಡಿಯ ಕುಡಿಯೊಂದ ಕನ್ನಡದ ನುಡಿಯೊಂದ
ಚೆಲ್ಲುವೆನು ನಿಮ್ಮುಡಿಗೆ ಅದುವೆ ಭಾವಬಿಂದು

ಕನ್ನಡದ ಪದವೊಂದ ನೀಡುವೆನು ನಿಮಗಿಂದು...
ಕನ್ನಡವೆ ಎನ್ನೊಡವೆ ಕನ್ನಡವೆ ಮುನ್ನಡವೆ
ಕಂಡಿರುವೆ ಕನಸೊಂದ ಕೆಡಿಸದಿರಿ ಅದರಂದ
ಒಡೆಯದಿರಿ ಅನುಬಂಧ ಕಡಿಯದಿರಿ ಸಿರಿಗಂಧ
ಬಸಿರಲ್ಲಿ ಬೆಸಗೊಂಡ ಉಸಿರಲ್ಲಿ ಕಸಿಗೊಂಡ
ನುಡಿಯಲ್ಲಿ ಶಿವ ಕಂಡ ನಡೆಯಲ್ಲಿ ಭವ ಕಂಡ
ತಾಯೆಂದು ಪಡೆದವಗೆ ತಾಯೆಂದು ತಿಳಿದವಗೆ
ತಾಯೆಂದು ಕರೆದವಗೆ... ನೀಡುವೆನು ತನಿ ನೆಳಲು
ತಾಯೆನಲು ಅರೆಗಳಿಗೆ ತಾಯೆನಲಿ ಅರೆಗಳಿಗೆ
ಹಾಲೂಡಿ ಪೊರೆಯುವೆನು ಬಾಳೆಂದು ಹರಸುವೆನು ಜೀವಸಿಂಧು

## ೯. ಚಕ್ರ

ಈಶನಾಗುವ ಮುನ್ನ
ದಾಸನಾಗಬೇಕು
ದಾಸನಾಗುವ ಮುನ್ನ
ವ್ಯಾಸನಾಗಬೇಕು

ತಂಪು ಹೊತ್ತಿನಲ್ಲಿ
ಏರು ಹತ್ತಬೇಕು
ಸುತ್ತಿ ಸುಳಿದು ಸುಟ್ಟು
ಸೂರ್ಯನಾಗಬೇಕು

ಬಣ್ಣ ಹಚ್ಚಿ ಕಳೆದು
ಕುಣಿದು ದಣಿಯಬೇಕು
ಬದುಕು ಬಾಗಿ ತೂಗಿ
ಮಾಗಿ ಮಣಿಯಬೇಕು

ಅಂಜಿ ಅಂಜಿ ಅರಿತು
ದೀನನಾಗಬೇಕು
ಗಿಂಜಿ ಗಿಂಜಿ ಗರುವ
ನಂಜ ನೀಗಬೇಕು





ಸಂಜೆ ಹಣ್ಣಾಗಿ
ಇಳೆಯು ತಣ್ಣಗಾಗಿ
ಹೊಳೆದು ಬಣ್ಣವಾಗಿ
ಚಿಕ್ಕೆ ಮೂಡಬೇಕು

ನೊಂದು ಬೆಂದು ನೊಂದು
ಚಿತ್ತ ಕರಗಿದಂದು
ಚಕಿತನಾಗಬೇಕು
ಜಗದ ಜೀವವೊಂದು
ಆಗಿ ದೇವಬಿಂದು
ಮುಕ್ತನಾಗಬೇಕು.

## ೧೦. ಜಿಎಸ್ಸೆಸ್‌ಗೆ ಪದ್ಯಾಂಜಲಿ

ಕಾಣದ ಕಡಲಿಗೆ ಹಂಬಲಿಸಿ
ಮೋಡವೊಂದು ಅಲೆದಿದೆ
ಮಳೆಯಾಗಿ ಸುರಿಯುವುದೆಂತು?
ಕಾದು ನೋಡಬೇಕಿದೆ...

ಹಚ್ಚಹಸಿರು ಹೂಬಳ್ಳಿಯಲಿ
ರಾಶಿ ಹೂವು ಸುರಿದಿದೆ
ಬೆಳ್ಳನ ಮಲ್ಲಿಗೆಯ ಘಮ
ಹತ್ತೂ ದಿಕ್ಕಿಗೆ ಸೂಸಿದೆ...

ಎಲ್ಲೋ ಮಗುವೊಂದು ಅಳುತಿದೆ
ಅತ್ತೂ ಕರೆದು ಕೂಗಿದೆ
ಜಡೆಯಾಚೆ ಮರೆಯಾದ ತಾಯ
ಮೊಗ ನೋಡಲೆಂದು ಕಾದಿದೆ



ಉಡುಗಣವೇಷ್ಠಿತ ಚಂದ್ರ ಸುಶೋಭಿತ
ಸರ್ಪವಿಭೂಷಿತ ಶಿವನೇ
ದೀನದಲಿತರ ದುಃಖಿ ದರಿದ್ರರ ಸಖನೇ
ಎದೆ ತುಂಬಿ ಹಾಡಲೆಂದೇ
ಕವಿಯ ಸೃಷ್ಟಿಸಿದೆಯೇನು?

ಪ್ರೀತಿ ಸ್ನೇಹಗಳ ಒರತೆ
ಜೀವಜಲದಂತಹ ಕವಿತೆ
ಸವಿದು ಸಂಪನ್ನವಾಯಿತು
ಸಹೃದಯ ಬಳಗ ತಾನು

ಹಣತೆ ಬೆಳಗಿದಿರಿ ನೀವು
ನಿಮ್ಮ ಕವಿತೆಗಳಿಗಿಲ್ಲ ಸಾವು.

## ೧೧. ಬದುಕಿದ್ದಾಗ ಬನ್ನಿ...

ಬದುಕಿದ್ದಾಗ ಬನ್ನಿ
ಕೂಡಿ ಆಡಿ ಒಂದಿಷ್ಟು ಮಾತನಾಡಿ
ಕಣ್ಣಲ್ಲಿ ಕಣ್ಣಿಟ್ಟು ನೋಡಿ
ನಿಮಗಿಷ್ಟವಾದ ಹಾಡು ಹಾಡಿ

ಕಾಡಿ... ಬೇಡಿ...
ತೋಡಿಕೊಳ್ಳಿ ಎಷ್ಟು ಬೇಕಾದರೂ
ಗತವೈಭವ ನೆನೆಸಿಕೊಂಡು
ಅತ್ತೂ ಕರೆದೂ ಹಗುರಾಗಿ

ಈ ಹೊತ್ತು ಹೀಗೇಕೆ
ನಿಂತಲ್ಲೇ ಇದೆ ಎಂದು
ಕನಲಿ ಕಂಬನಿ ಮಿಡಿಯಿರಿ

ಬಸ್ಸಾರು, ಬಿಸಿ ಮುದ್ದೆ ರೊಟ್ಟಿ ಪಲ್ಲೆ
ಮಾಡಿ ಉಣಿಸುವೆನು
ಹುರಿದವರೆ, ನೆಲಗಡಲೆ ಕೊಬ್ಬರಿ
ಬೆಲ್ಲವನಿತ್ತು ಸತ್ಕರಿಸುವೆನು





ಬಾಗಿ ಬೆನ್ನು ಮಂಜಾಗಿದೆ ಕಣ್ಣು
ಇನ್ನೇನು ಉದುರಲಿದೆ ಮಾಗಿ ಹಣ್ಣು

ಅಕ್ಕರೆಯಿಂದ ಅಪ್ಪಿ ಮುದ್ದಾಡಿ
ಕೂಗಿ ಬಾಯ್ತುಂಬ ಹೆಸರು
ಫಡಫಡಿಸಿ ಹಾರಿ ಹೋಗಲಿರುವ
ಪ್ರಾಣ ಪಕ್ಷಿಯನು ಒಂದು ಚಣ
ತಡೆದು ನಿಲ್ಲಿಸಿ

ಕಾವಳದ ಮುಂಜಾವು
ಕೊರಡಿನಂತಾಗಿ ಕೈ-ಕಾಲು
ಜೀವ ಗಡಗಡ ನಡುಗಿ
ಉಸಿರು ಉಡುಗಲು
ಹರಿಸದಿರಿ ಮೊಸಳೆ ಕಣ್ಣೀರು
ಜಗಜ್ಜಾಹೀರು ಮಾಡದಿರಿ ನಿರ್ಗಮನ
ಹೇಗೋ ಸೇರಿಕೊಳ್ಳುವೆ ಶಿವನ ಪಾದ

ಅದಕಿಂತ ಮೊದಲು
ಬನ್ನಿ ಬದುಕಿದ್ದಾಗ ಬನ್ನಿ...

## ೧೨. ಹೂವೊಂದು ಕಾದಿದೆ

ಈ ತೊಗಲುಬೊಂಬೆಯನಪ್ಪಿರುವ
ಜರತಾರಿ ಸೀರೆ, ರೇಷಿಮೆಯ ಕುಪ್ಪಸ
ವಜ್ರದ ನತ್ತು, ಮುತ್ತಿನೋಲೆ
ಕೊರಳ ಹಾರ, ಹೆರಳಭಾರ
ನಿನಗರ್ಪಿಸುವೆ...

ರಸಗಂಧಗಳಲ್ಲಿ
ಅದ್ದಿ ತೆಗೆದಂತಿರುವ
ಕಣ್ಣು ತುಟಿ ಮೂಗು ಗಲ್ಲಗಳನ್ನೂ
ಛಲ ಬಲಗಳೆರಡೂ ಸಂಗಮಿಸಿ
ಪುಷ್ಟಿಗೊಂಡಿರುವ
ಎದೆಗೂಡು, ರಕ್ತ, ಮೂಳೆ ಮಾಂಸ
ಮಜ್ಜೆಯನೂ ನಿನಗರ್ಪಿಸುವೆ...

ಹೊರೆಯಿಳಿಸಿ ಹಗುರಾಗೆ
ಹಾರಿ ಹೋಗುವೆ...
ಚಿಟ್ಟೆಯಾಗಿ...
ಬೆಟ್ಟದಾಚೆ ಹೂವೊಂದು ನನಗಾಗಿ ಕಾದಿದೆ.



## ೧೩. ಭಾವ ಶುದ್ಧಿ ಮಾಡೋ...

ಸಿಟ್ಟು ಮಾಡಲೇನು
ಬೆಟ್ಟು ತೋರಲೇನು
ಗೀರಿ ಗೀರಿ ಗೀರಿ
ಗಾಯಗೊಳಿಸಲೇನು...

ಹೊಡೆದು ಹಾಕಲೇನು
ಬಡಿದು ಹಾಕಲೇನು
ಸಿಗಿದು ಸಿಗಿದು ಸಿಗಿದು
ಸಿಪ್ಪೆ ಮಾಡಲೇನು...

ನೇಣು ಹಾಕಲೇನು
ಗೋಣು ಮುರಿಯಲೇನು
ಉಗಿದು ಉಗಿದು ಉಗಿದು
ಉರಿಯ ಹಚ್ಚಲೇನು...

ಭಂಗ ಮಾಡಿ ಲಿಂಗ
ಮಾಡದಂಗೆ ಸಂಗ
ಬಗೆದು ಬಗೆದು ಬಗೆದು
ಭಿನ್ನ ಮಾಡಲೇನು...

ಬುಸ್ಸೆಂದರೇನು
ಉಸ್ಸೆಂದರೇನು

ಹಲ್ಲು ಕಡಿದರೇನು
ಹುಲ್ಲು ತುಳಿದರೇನು
ಬೇಶಾಯಿತೇನು
ಲೇಸಾಯಿತೇನು...

ಸೊಕ್ಕಿದವನ ಕುಕ್ಕಿ
ಕುಕ್ಕಿ ಕುಕ್ಕಿ ಕುಕ್ಕಿ
ಜೀವ ತೆಗೆದರೇನು
ಗರುವ ಅಳಿವುದೇನು...

ಬಿಕ್ಕಿ ಬಿಕ್ಕಿ ಅತ್ತೆ
ಮುಕ್ಕಿ ಮುಕ್ಕಿ ಸತ್ತೆ
ಎಷ್ಟು ಬೆಂದರೇನು
ಎಷ್ಟು ನೊಂದರೇನು
ತಗ್ಗಲಿಲ್ಲ ಅವನು
ಬಗ್ಗಲಿಲ್ಲ ಅವನು

ತಿದ್ದಿ ತಿದ್ದಿ ತೀಡೋ
ಭಾವ ಶುದ್ಧಿ ಮಾಡೋ
ಗುದ್ದಿ ಗುದ್ದಿ ಬುದ್ಧಿ
ಭಾವಶುದ್ಧಿ ಮಾಡೋ...

ಬೇಡಿಕೊಂಡೆ ಶಿವನ
ಹಾಡಿಕೊಂಡೆ ಕವನ.



## ೧೪. ದಸ್ತಾವೇಜು

ನದಿಗಳು ಬೆಟ್ಟಗಳು
ಕಣಿವೆಗಳು ಕಾಡುಗಳು
ನಾಡುಗಳು ಹಾಡುಗಳು
ಈಗ ಕಾಗದದ ಮೇಲೆ
ಕಾಗದದ ಮೇಲೆ ಮಾತ್ರ ಉಳಿದಿವೆ!

ಇಂಥ ದೇಶದಲ್ಲಿ
ಇಂಥ ಭಾಷೆಯಲ್ಲಿ
ನೋಂದಣಿಯಾಗಿದೆ
ಸಹಿಗಳು ಸೀಲುಗಳು
ಕರಾರುಗಳು ಅಬ್ಬಾ...
ಭಯಂಕರವಾಗಿ
ದಿಟ್ಟಿಸಿ ನೋಡುತ್ತಿವೆ...

ಒಂದು ಬಿರುಗಾಳಿ ಅದನು
ಎತ್ತಿಕೊಂಡು ಹೋದ ಹಾಗೆ...
ಒಂದು ನೆರೆ ಅದನು
ಕೊಚ್ಚಿಕೊಂಡು ಹೋದ ಹಾಗೆ...
ಭುವಿ ನಡುಗಿ ನೆಲದೊಳಗೆ
ಹುಗಿದು ಮಡಗಿದ ಹಾಗೆ
ಕನಸ ಕಂಡೆ!

ಒಂದು ಇಲಿ ಬಲಿ ಎತ್ತುತ್ತಿತ್ತು
ನುರಿಸಿ ನುರಿಸಿ ಕಾಗದವನು
ಕರುಂ ಕರುಂ ಕರುಂ ಕರುಂ

ಎಚ್ಚರವೋ ಕನಸೋ ನಾನರಿಯೆ!

## ೧೫. ಜಗದಂಬೆ ಮುಟ್ಟಿದ ಚಪ್ಪಲಿ

ದೇಗುಲದ ಬಾಗಿಲಲಿ
ಒಂದು ಜೊತೆ ಚಪ್ಪಲಿ

ದೇವರಿಗೆ ಹೋಗಿ, ಹೋಗಿ
ಬಾಗಿ, ತಲೆ ಬಾಗಿ ಸವೆದಿದೆ
ಒಂದು ಜೊತೆ ಚಪ್ಪಲಿ

ಗುಡಿಯೊಳಗೆ ಬೆಳಗಿ
ಕುಂಕುಮದಾರತಿ
ಕಾದಿಹರು ಭಕ್ತರು
ಕರಗುವುದೇ ಕಲ್ಲಿನ ಮೂರುತಿ?

ಚಳಿಗಾಳಿ ಮಳೆ ಬಿಸಿಲಲಿ
ಹೊಸಿಲಾಚೆ ತಾನಿರಲು ಧ್ಯಾನದಲಿ
ಮೆಟ್ಟಿದಳು... ಮುಟ್ಟಿದಳು
ಜಗದಂಬೆ...

ಲೋಕವು ಒಪ್ಪಲಿ ಬಿಡಲಿ
ಮೆಟ್ಟಿದಳು ಜಗದಂಬೆ ಚಪ್ಪಲಿ.



## ೧೬. ಕರುಣಾಳು

ಕಸದ ತೊಟ್ಟಿಯಲಿ ಹಸುಗೂಸು
ಇನ್ನೂ ಇನ್ನೂ
ಹರಿದಂತಿಲ್ಲ ತಾಯಮಾಸು

ಜನಸಂದಣಿಯನು ತೂರಿ
ನಿಡಿದಾದ ತೋಳುಗಳ ಚಾಚಿ
ಬಾಚಿದಳು ಮಿಷನ್ ಆಸ್ಪತ್ರೆಯ ಮೇರಿ
ಗುಸಗುಸ ಪಿಸಪಿಸ
ಅವಳಿನ್ನೂ ಕುಮಾರಿ!

ಮುದ್ದನುಕ್ಕಿಸುತಿದೆ ಹಸುಗೂಸು
ಸಂಶಯವೇ ಇಲ್ಲ ಬಾಲಯೇಸು
ಕಂಡಳು, ಎತ್ತಿಕೊಂಡಳು
ಎದೆಗೆ ಒತ್ತಿಕೊಂಡಳು
ತಾಯಿ ಅವಳು ಕರುಣಾಳು.

## ೧೭. ಕುಂಬಾರ ಮತ್ತು ಕವಿ

ಮಡಕೆಯ ಮಾಡಿದೆ
ಕುಡಿಕೆಯ ಮಾಡಿದೆ

ಮಡಕೆಯಲಿ ನೀರು ತುಂಬಿಟ್ಟು
ಕುಡಿಕೆಯಲಿ ಹಾಲು ಹೆಪ್ಪಿಟ್ಟು
ನಿಸೂರಾದೆ...

ನೀರಲಿ ತೇಲಿದ ರವಿ
ಮೊಸರಿಗೆ ಮರ್ತ್ಯದ ಸವಿ

ಮೈದುಂಬಿ ಹಾಡಿದ ಕವಿ:
ತಿರೆಯದು ಗಿರಿಗಿರಿಗಿರಿ
ತಿಗರಿಯು ಗಿರಿಗಿರಿಗಿರಿ
ತಿರುಗಿ ತಿರುಗಿ ನೀನರಿ...





## ೧೮. ಮರ ಮತ್ತು ನರ

ಅತ್ತಿ ಆಲ ದೇಲ ಬೇಲ
ಆ ಮರವಲ್ಲ ಮಾರಾಯರೇ...

ನಾ ಹೇಳೋದು
ಗಾಳಿ ಮರ, ಸುಳಿಗಾಳಿ ಮರ
ಬಿರುಗಾಳಿ ಮರ

ಎಲೆ ಹೂವು ರೆಂಬೆ ಕೊಂಬೆ
ಅಲ್ಲ, ಅಲ್ಲ, ಅದಲ್ಲ ಮಾರಾಯರೇ...
ನಾ ಹೇಳೋದು
ಹಾಡೋ ಮರ, ನೀಡೋ ಮರ
ಆಡೋ ಮರ

ಹಸಿರು ಹಳದಿ ಕೆಂಪು ಸೊಂಪು
ಅಲ್ಲ, ಅಲ್ಲ ಅದಲ್ಲ ಮಾರಾಯರೇ...
ನಾ ಹೇಳೋದು
ಬಾಗೋ ಮರ, ತೂಗೋ ಮರ,
ನೀಗೋ ಮರ

ಬೇರು ನೀರು ಕಾವು ತಾವು
ಅಲ್ಲ, ಅಲ್ಲ, ಅದಲ್ಲ ಮಾರಾಯರೇ...
ನಾ ಹೇಳೋದು

ಶಾಪದ ಮರ, ತಾಪದ ಮರ
ಪರಿತಾಪದ ಮರ

ಹಕ್ಕಿ ಪಿಕ್ಕೆ ದುಂಬಿ ಜೇನು
ಅಲ್ಲ, ಅಲ್ಲ ಅದಲ್ಲ ಮಾರಾಯರೇ...
ನಾ ಹೇಳೋದು
ಸಾಲದ ಮರ, ಶೂಲದ ಮರ
ಮೇಳದ ಮರ

ಬಿದಿರು, ಕದಿರು, ಅದುರು, ಉದುರು
ಅಲ್ಲ, ಅಲ್ಲ ಅದಲ್ಲ ಮಾರಾಯರೇ...
ನಾ ಹೇಳೋದು
ಬಾವಿನ ಮರ, ನೋವಿನ ಮರ
ಸಾವಿನ ಮರ

ಚಿಳ್ಳೆ ಪಿಳ್ಳೆ ಕಳ್ಳೆ ಸುಳ್ಳೆ
ಒಂದೇ... ಎರಡೇ...
ಮರ ಮರ ಮರಮರ
ಥರ ಥರ ಥರಥರ

ಗುಡುಗಿ, ಉಡುಗಿ
ಹೆದರಿ ಬೆದರಿ
ಉಸಿರು ಬಿಟ್ಟು
ಉಸಿರು ಕೊಟ್ಟು
ಉಟ್ಟ ಬಟ್ಟೆಯಲ್ಲೇ
ಥಟ್ಟೆಂದು... ಮ
ರಾಮ ರಾಮ ರಾಮ ರಾಮ
ಎನುತ ನಡೆದು ಹೋದ
ನರ.



## ೧೯. ಕಂಗ್ಲಿಷ್ ಕವಿತೆ

ನನ್ನ ಅಪ್ಪನ ಭಾಷೆ ಕನ್ನಡ
ನನ್ನ ಅಮ್ಮನ ಭಾಷೆ ಕನ್ನಡ
ನನ್ನ ಭಾಷೆ ಕಂಗ್ಲಿಷ್!

ಕನ್ನಡ ಸೂಪರ್ ಆಗಿದೆ
ಕನ್ನಡ ಸಖತ್ ಆಗಿದೆ
ಕನ್ನಡ ಬೊಂಬಾಟ್ ಆಗಿದೆ
ಕನ್ನಡಕ್ಕೆ ತಾಕತ್ ಇದೆ
ಹೆಲ್ತಿಯಾಗಿದೆ, ವೆಲ್ತಿ ಆಗಿದೆ
ಕಲಿತರೂ ಕಲಿಯದಿದ್ದರೂ
ಕರ್ನಾಟಕದಲ್ಲಿ ಚಲ್ತಾ ಹೈ!

ನಂಗೆ ಅ ಆ ಇ ಈ
ಹುಟ್ಟಿದಾಗಿಂದಲೂ ಕಷ್ಟ
ಮಮ್ಮಿ ಡ್ಯಾಡಿಗೆ ಯಾವೊತ್ತಿಂದಲೂ
ಇಂಗ್ಲಿಷ್ ಅಂದ್ರೆ ಇಷ್ಟ.

ನಂಗೆ ಮಗ್ಗಿ ಗೊತ್ತಿಲ್ಲ
ಹುಗ್ಗಿ ಗೊತ್ತಿಲ್ಲ...
ಅಕ್ಕಿ ಫ್ಯಾಕ್ಟರಿಯಿಂದ ಬರುತ್ತೆ
ಹಾಲು ಬೂತಿನಿಂದ ಬರುತ್ತೆ
ಅಂತ ಇನ್‌ಫರ್ಮೇಶನ್ ಇದೆ
ಸಕಲವೂ ಟಿ.ವಿ., ಮೊಬೈಲ್
ಕಂಪ್ಯೂಟರ್‌ನಲ್ಲಿ ಇರುತ್ತೆ
ನೋ ಪ್ರಾಬ್ಲೆಮ್!
ಪಂಪ, ರನ್ನ, ಪೊನ್ನ, ಅನ್ನ
ಇವರೆಲ್ಲ ನಂಗೆ ಗೊತ್ತಿಲ್ಲ
ಬ್ಯಾ ಬ್ಯಾ ಬ್ಲ್ಯಾಕ್‌ಶೀಪ್ ಅಂತ
ಚೀರಿದ್ರೆ ಚಿನ್ನವೇ ಆಗಿಬಿಡ್ತಾರಂತೆ
ಅಂತೆ... ಕಂತೆ...

ಜಗತ್ತಿನ ಯಾವ ಭಾಷೆ ಡೆಡ್ ಆದ್ರೂನೂ
ಕಪ್ಪು ಸುಂದರಿ, ತಮಿಳು ಸಹೋದರಿ
ಉಳಿದೇ ಉಳೀತಾಳೆ...
ಅವಳು ಇಡ್ಲಿ ವಡೆ ತಿಂದು
ಕಾವೇರಿ ನೀರು ಕುಡಿದು
ಗಟ್ಟಿಮುಟ್ಟಾಗಿದಾಳೆ
ಹಳದಿ ಸೀರೆ ಉಟ್ಕೊಂಡು
ಸೇವಂತಿಗೆ ಮುಡ್ಕೊಂಡು
ಸೈಕಲ್ ಹೊಡೀತಾ ಹೊಡೀತಾ...
'ನಲ್ಲಾ ಇರುಕ್ಕಿಯಾ?' ಅಂತ ನನ್ನ ಕೇಳ್ತಾಳೆ!
ಅವಳು ಸ್ವಾಭಿಮಾನಿ, ನಾನವಳ ಅಭಿಮಾನಿ
ಯು ನೋ ಕನ್ನಡ ತುಂಬಾ ವೀಕು
ವೀಕ್‌ನೆಸ್ಸು ಜೀನ್‌ನಲ್ಲೇ ಇದೆ!
ಅದು ಕ್ಯಾರಿ ಆಗ್ತಾನೆ ಇರುತ್ತೆ ಮತ್ತೆ ಮತ್ತೆ...

ಎದೆ ಹಾಲು ಕುಡಿದ್ರೆ ಗಟ್ಟಿಮುಟ್ಟಾಗಿ
ಜಗತ್ತನ್ನೇ ಜಯಿಸಬಹುದಂತೆ
ನಾನು ಪುಟ್ಟ ಕಂದ, ಕನ್ನಡದ ಕಂದ
ನಂಗೆ ಬಾಟಲಿ ಹಾಲು ಕುಡಿಸಿದ್ರೆ
ನಾನು ಏನು ಮಾಡಲಿ?
ಎದೆ ಹಾಲು, ಚೊರ ಚೊರ ಅಂತ ಎಳೆದು
ಮೊಲೆವಾಲು ಕುಡಿಯೋದು ನನ್ನ ಹಕ್ಕು
ನಾಲಗೆಯ ಮೇಲೆ
ಚಟಪಟಾಂತ ಕನ್ನಡದ ಪದಗೋಳು
ಕುಣಿದ್ರೆ ನಂದೇನು ತಪ್ಪು?
ಅಪ್ಪಗಳಿರಾ, ಅಮ್ಮಗಳಿರಾ
ನೀವೇ ಹೇಳಿ, ನಾನು
ಯಾವ ಕೋರ್ಟು ಕಛೇರಿಗೆ ಹೋಗ್ಲಿ?!





## ೨೦. ಅಂಬೇಡ್ಕರ್...

ಅವನು ನನ್ನ ಅಣ್ಣನೇ... ತಮ್ಮನೇ...
ಬಂಧುವೇ... ಬಳಗವೇ...
ಇಲ್ಲಪ್ಪ ಇಲ್ಲ...
ನೋವು-ಅವಮಾನಗಳಲ್ಲಿ
ಬೆಂದು ಗಟ್ಟಿಯಾದ ಜೀವ...
ತಾನೇ ಅರೆಜೀವ... ಆದರೂ...
ಮುಳುಗುತ್ತಿದ್ದವ ತೇಲುತ್ತಿದ್ದ ನನ್ನತ್ತ
ಕೈ ಚಾಚಿದ...

ಕಾಗೆಯ ಬಳಗದಂತೆ ಹಂಚಿಕೊಂಡು ತಿನ್ನು
ಸೋದರಿಗೂ ಪಾಲು ನೀಡಿ ಉಣ್ಣು...
ಇದು ಭಿಕ್ಷೆಯಲ್ಲ ರಕ್ಷೆ ಎಂದ
ಕರುಣಾ ಸಮುದ್ರ...

ಕಿಡಿಯೋ... ಕಾಳ್ಗಿಚ್ಚೋ...
ಜಾಲ್ವೆಯೋ... ಜ್ವಾಲಾಮುಖಿಯೋ...
ಯೋಧನೋ... ಕ್ರೋಧನೋ...
ದೂರಲಾರೆ... ಸಹೋದರ !!

ಈ ಬಡವಿಯ ಮನೆಯ
ಒಲೆಯೊಳಗಣ ಬೆಂಕಿ...
ಕುದಿಯುವ ಎಸರು...
ಅರಳುವ ಅನ್ನ...
ಶಿರದ ಮೇಲಣ ಪಾದ ಧೂಳಿ

## ೨೧. ಅಸಹಿಷ್ಣುತೆ

ಜನರನ್ನು ರಕ್ತ ಮಾಂಸ ಮೂಳೆ
ಮಜ್ಜೆ ಮಿದುಳು ಹೃದಯ
ಮಾತು ಮೌನ ಇರುವ
ಮನುಷ್ಯರನ್ನಾಗಿ ನೋಡಿ...

ಕೇವಲ ಮತವನ್ನಾಗಿ ನೋಡಿ
ಕೆಡಿಸದಿರಿ ಜೀವನಾಡಿ
ಮಾಡದಿರಿ ಮತಿಹೀನನಾಗಿ...
ಓ ಸೋದರರೇ...
ನಾನು ಬದುಕಿ ಬಾಳಲೆಂದು ಬಂದಿರುವೆ
ಕಾದಾಡಲು..ರಕ್ತ ಹರಿಸಲು ಅಲ್ಲ!!





## ೨೨. ನನ್ನ ದೇವರು

ನನ್ನ ದೇವರು
ನನ್ನ ತಡಿಯಲ್ಲಿರಲಿ...
ನನ್ನ ದೇವರು
ನನ್ನ ಗುಡಿಯಲ್ಲಿರಲಿ...

ನನ್ನ ದೇವರು
ನನ್ನ ನುಡಿಯಲ್ಲಿರಲಿ...
ನನ್ನ ದೇವರು
ನನ್ನ ನಡೆಯಲ್ಲಿರಲಿ...

ನನ್ನ ದೇವರು
ನನ್ನ ಮನೆಯಲ್ಲಿರಲಿ
ನನ್ನ ದೇವರು
ನನ್ನ ಮನದಲ್ಲಿರಲಿ...

ಪಿಸು ನುಡಿದರೆ ಓಗೊಡನೆ ರಾಮ?
ಕೆಪ್ಪನೆ, ಕಿವಿಗೊಡನೆ ರಹೀಮ?

ಮೈದುಂಬಿ ಕುಣಿಯುವೆನು
ಮನಸಾರೆ ಭಜಿಸುವೆನು
ನನ್ನ ಮನೆಯೊಳಗೆ
ನೆಮ್ಮದಿಯಲಿ ವಿರಮಿಸಲಿ
 ಹಾದಿ ಬೀದಿಯ ಜನತೆ.

## ೨೩. ನಗರ

ಚಿಟ್ಟೆಗಳಿಗಾಗಿ ಹೂಗಳನ್ನು
ನೀಡಿತು ಮರ

ಹಕ್ಕಿಗಳಿಗಾಗಿ ಹಣ್ಣುಗಳನ್ನು
ನೀಡಿತು ಮರ

ಮನುಜನಿಗೆ ನೀರು
ನೆರಳು ನೀಡಿತು ಮರ

ಚಿಟ್ಟೆ ಮರ ಕಡಿಯಿತೆ?
ಇಲ್ಲ...
ಹಕ್ಕಿ ಮರ ಕಡಿಯಿತೆ?
ಇಲ್ಲ...

ಸಿರಿಗರ ಬಡಿದ ನರ
ಕಡಿದ ಸಾಲು ಸಾಲು ಮರ
ಈಗದು ನಗರ
ಸರಸರ ನಾಗರ





## ೨೪. ಯುದ್ಧಕ್ಕೆ ಗುಡ್ ಬೈ

ಹೊಡೆದಾಡಲು
ಕೋಟಿ ಕೋಟಿ ಹಣ
ಖರ್ಚು ಮಾಡಬೇಕೇ ?

ಕಾದಾಡಿ
ಕೋಟಿ ಕೋಟಿ ಜನ
ಜೀವ ತೆರಬೇಕೇ?

ದ್ವೇಷಿಸಲು ದಮನಿಸಲು
ದೊಡ್ಡ ದೊಡ್ಡ ಯೋಜನೆ
ಹಾಕಿಕೊಳ್ಳಬೇಕೇ?

ದವಸ ಧಾನ್ಯಗಳಂತೆ
ಮದ್ದು ಗುಂಡುಗಳನ್ನ
ಸಂಗ್ರಹಿಸಿ ಇಡಬೇಕೇ?

ಯಾಕೋ ಮನುಜರು
ಅನ್ನ ತಿನ್ನುವವರಂತೆ ಕಾಣುತ್ತಿಲ್ಲ!?
ಅವರಿಗೆ ಪ್ರಶ್ನೆಗಳಿಲ್ಲ!!
ಬದುಕಿಲ್ಲ... ಸತ್ತಿಲ್ಲ...

## ೨೫. ಹೀಗೂ ಉಂಟೆ?

ಅವರಿಗೆ ನನ್ನ ಬಣ್ಣ ಇಷ್ಟವಾಗಲಿಲ್ಲವಂತೆ
ನಾನು ಸುಣ್ಣ ಬಳಿದುಕೊಂಡು ಬಿಳಿಯಾದೆ

ಅವರಿಗೆ ನನ್ನ ನೋಟ ಇಷ್ಟವಾಗಲಿಲ್ಲವಂತೆ
ನಾನು ನಡ ಬಾಗಿಸಿ ನೆಲ ನೋಡಿದೆ

ಅವರಿಗೆ ನನ್ನ ವೇಷ ಇಷ್ಟವಾಗಲಿಲ್ಲವಂತೆ
ನಾನು ಬಟ್ಟೆ ಕಳಚಿ ಬತ್ತಲಾದೆ

ಅವರಿಗೆ ನನ್ನ ಭಾಷೆ ಇಷ್ಟವಾಗಲಿಲ್ಲವಂತೆ
ನಾನು ಮಾತು ಹುಗಿದು ಮೂಕಿಯಾದೆ

ಅರೆ! ಅವರಿಗೆ ನನ್ನ ದೇಶ ಇಷ್ಟವಾಯಿತಂತೆ!
ಈ ನೆಲ ಈ ಜಲ ಈ ಬೆಟ್ಟ ಈ ಕಣಿವೆ
ತುಂಬ ತುಂಬ ಇಷ್ಟವಾಯಿತಂತೆ!

ಭಲೆ ಭಲೆ! ಅವರೇ ಈಗ ದೇಸಿ, ಇಲ್ಲಿ ನಿವಾಸಿ!
ನಾನೇ ಪರದೇಶಿ!!





## ೨೬. ಕನಕನ ಕಿಂಡಿಯಲ್ಲಿ...

ಏನ ಕಂಡೆ? ಏನ ಕಂಡೆ?

ತಾಳವಾದ್ಯಗಳ ಕಂಡೆ
ಮಂತ್ರ ಘೋಷವ ಕಂಡೆ

ಧೂಪ ದೀಪವ ಕಂಡೆ
ಅಷ್ಟ ನೈವೇದ್ಯವ ಕಂಡೆ

ಪಟ್ಟೆ ಪೀತಾಂಬರ ಕಂಡೆ
ದುಂಡು ನಾಮವ ಕಂಡೆ

ರಟ್ಟೆ ಬಲಭೀಮರ ಕಂಡೆ
ಹೊಟ್ಟೆ ಗುಡುಮಗಳ ಕಂಡೆ

ಸೊಲ್ಲಾಡದೆ ಕಲ್ಲಾಗಿ ನಿಂತ
ಗೊಲ್ಲ ಹುಡುಗನ ಕಂಡೆ

ಎದೆ ಝಲ್ಲೆನ್ನುವಂತೆ
ಹೊಡೆದರದೋ ರಣ ರಣ ಚಂಡೆ

## ೨೭. ನೆನೆ ನೆನೆ ನೆನೆ...

ಸೀರೆ ಸೆಳೆವಾಗ...
ಕೃಷ್ಣನನ್ನು ನೆನೆ

ಕಲ್ಲು ಒಗೆವಾಗ...
ಕ್ರಿಸ್ತನನ್ನು ನೆನೆ

ಸರಿದು ಹೋಗಲಿ
ವಿಷ ಘಳಿಗೆ
ಕೊಟ್ಟುಕೊಳ್ಳದಿರು
ನೀರಿಗೆ ಬೆಂಕಿಗೆ

ಮರುಮಾತಿಲ್ಲದೆ
ಮುಕ್ಕಣ್ಣನನ್ನು
ನೆನೆ ನೆನೆ ನೆನೆ!!





## ೨೮. ಬಾಹುಬಲಿ

ತಾನು ತುಂಬ ಸಣ್ಣವನು
ಎಂದುಕೊಂಡವನು
ಬೃಹತ್ ಗೊಮ್ಮಟನನ್ನು ಕೆತ್ತಿದ

ಪಾದಪದ್ಮಕೆ ನಮಿಸಿ
ನಾಗರಗಳ ಮಣಿಸಿ
ಬಯಕೆ ಬಳ್ಳಿಯನೇರಿ
ಕಣ್ಣು ತುಟಿ ಗಲ್ಲ
ಮುಂಗುರುಳ ಮುಡಿಸಿ
ಮಂದಹಾಸವ
ಅರಳಿಸಿ
ನೆಲದಲ್ಲಿದ್ದವ
ಮುಗಿಲು ಮುಟ್ಟಿದ

ಚಳಿಗಾಳಿ ಮಳೆ
ಬಿರುಬಿಸಿಲಲಿ ಒಂದಾಗಿ
ನಿಂದವನೇ ಬಾಹುಬಲಿ
ಬೆರಗು ಪ್ರೀತಿಯಲಿ
ಮಿಂದವನೇ ಬಾಹುಬಲಿ
ಕೋಟಿ ಏಟುಗಳಿಗೀಡಾಗಿ
ಮರುಹುಟ್ಟಿದನೆ ಕಲಿ?

ಸಹಸ್ರ ಬಾಹುಗಳು ಕಡೆದ
ದಿವಿನಾದ ಕನಸೇ ಬಾಹುಬಲಿ?!

## ೨೯. ಒಂದಾನೊಂದು ಕಾಲದಲ್ಲಿ...

ಬೆಟ್ಟವಾಗಿದ್ದೆ ಗುಡ್ಡವಾಗಿದ್ದೆ
ಬಗೆದು ಹಾಕಿದರು

ನದಿಯಾಗಿದ್ದೆ ಹೊಳೆಯಾಗಿದ್ದೆ
ಬತ್ತಿಸಿ ಬಗ್ಗಡವಾಗಿಸಿದರು

ಮರವಾಗಿದ್ದೆ ಗಿಡವಾಗಿದ್ದೆ
ಕತ್ತರಿಸಿ ಬಿಸುಟರು

ಮೊಗ್ಗಾಗಿದ್ದೆ ಹೂವಾಗಿದ್ದೆ
ಹೊಸಕಿ ಹಾಕಿದರು

ಇರುವೆಯಾಗಿದ್ದಾಗ
ಮೆಟ್ಟಿ ಮಣ್ಣಾಗಿಸಿದರು

ಮೀನಾಗಿದ್ದಾಗ
ಬಲೆಬೀಸಿ ಹಿಡಿದರು

ಆಮೆಯಾಗಿದ್ದಾಗ
ಚಿಪ್ಪೊಡೆದು ಮಾರಿದರು





ಹಕ್ಕಿ ಇಣಚಿ ಮೊಲ ಜಿಂಕೆ
ಏನೆಲ್ಲ ಆಗಿದ್ದೆ...
ಗೋಣು ಮುರಿದರು

ಹುಲಿ ಸಿಂಹ ಕರಡಿ ಆನೆ
ಅಟ್ಟಾಡಿ ಮಣಿಸಿದರು

ಮರ್ಕಟಮನ ಚಿಗುರಿ
ರೆಂಬೆಕೊಂಬೆ ಹಾರಿ ತೂಗಾಡಿ
ಕೂತು ನಿಂತು ನಡೆದು
ಗೊಂದಲದ ಗೂಡಾಗಿ
ಪಾಡೆ ಹಾಡಾಗಿ ಕಾದಿರುವೆ
ಇಲ್ಲವಾಗಲು  ದಿಟವಾಗಿ...

## ೩೦. ಫಲಿಸಲೆಂದು ಪ್ರಾರ್ಥನೆ

ಮಳೆಯು ಆಗಿ ಇಳೆಗೆ ಬಂದೆ
ಅದುವೆ ನನ್ನ ಪ್ರಾರ್ಥನೆ
ಹೊಳೆಯೂ ಆದೆ ಬೆಳೆಯೂ ಆದೆ
ಅದುವೆ ನನ್ನ ಪ್ರಾರ್ಥನೆ

ಸುತ್ತಿಸುಳಿದೆ ಗಾಳಿಯಂತೆ
ಅದುವೆ ನನ್ನ ಪ್ರಾರ್ಥನೆ
ಚೆಲುವ ತಂದೆ ಘಮವ ತಂದೆ
ಅದುವೆ ನನ್ನ ಪ್ರಾರ್ಥನೆ

ಬೆಳಕ ಮಾಡಿ ಪುಳಕ ತಂದೆ
ಅದುವೆ ನನ್ನ ಪ್ರಾರ್ಥನೆ
ಬಿಸುಪ ತಂದೆ ಹೊಳಪ ತಂದೆ
ಅದುವೆ ನನ್ನ ಪ್ರಾರ್ಥನೆ

ಅರಳಿ ತಾನೆ ಹೂವಿನಂತೆ
ರೆಕ್ಕೆ ಬೀಸಿ ಹಕ್ಕಿಯಂತೆ
ಹಾರಿ ಹೋದೆ ಹಂಸದಂತೆ

ಮಗುವು ಆಗಿ ಜಗವು ಆಗಿ
ತಿಳಿಯಲೆಂದು ತಿರುಗಿ ಬಂದೆ
ಬೆರಗಿನಿಂದೆ ತಿರುಗಿ ಬಂದೆ
ತಿರುಗಿ ಬಂದೆ ಅರಿಯಲೆಂದೆ
ಫಲಿಸಲೆಂದು ಪ್ರಾರ್ಥನೆ





## ೩೧. ಬೆರಗಾಯಿತು

ಉಂಡಾಯಿತು ಉಟ್ಟಾಯಿತು
ಹೊರಟುಬಿಡು ಹೊತ್ತಾಯಿತು

ಕರೆ ಬಂದಿತು ಸೆರೆ ಮುಗಿಯಿತು
ಬಿಡುಗಡೆಯ ದಿನ ಬಂದಾಯಿತು

ಕಾಲಡಗಿತು ಕೈ ನಡುಗಿತು
ಹಾರಿ ಎದೆ ನಿಂತಾಯಿತು

ಹುಟ್ಟುಡುಗೆ ತೊಟ್ಟಾಯಿತು
ಕಳಚಿ ತೊಟ್ಟು ಬಿದ್ದಾಯಿತು

ಅಲೆದು ಜೀವ ಹುಡುಕಾಡಿತು
ಮರಳಿ ಬರಲು ಹೆಣಗಾಡಿತು

ಹುಟ್ಟು ಹಬ್ಬ ಮೊದಲಾಯಿತು
ತಿರುಗಿ ಬಂದೆ ಬೆರಗಾಯಿತು.

## ೩೨. ಪ್ರೇಮಕ್ಕಿಲ್ಲ ಆಪತ್ತು

ಆ ದಿನ ಆ ಕ್ಷಣ
ಅವನು ಇಲ್ಲವಾದನು
ಅವಳು ಇಲ್ಲವಾದಳು

ಲೋಕದ ತುಂಬ
ಉಸಿರಿನ ಪರಿಮಳ
ಗಾಳಿಯಲ್ಲಿ ಬೆರೆತು
ಒಂದಾದರು

ಹಂಗಿಸಿದವರಿಗೆ
ಹೂವು ಕೊಟ್ಟರು
ದಂಡಿಸಿದವರ
ದುಪ್ಪಟ್ಟು ಪ್ರೀತಿಸಿದರು!

ಕೊನೆಯ ದಿನ
ಕೊನೆಯ ಕ್ಷಣ
ತುತ್ತಿಟ್ಟರು, ಮುತ್ತಿಟ್ಟರು

ತುಂಬು ಜೀವನ
ಶಾಂತ ನಿರ್ಗಮನ
ಅವನಿಗೆ ತೊಂಬತ್ತು
ಅವಳಿಗೆ ಎಂಬತ್ತು

ಪ್ರೇಮದಲ್ಲಿ ವಿಷವೂ ಅಮೃತ
ಅದೇ ವ್ರತ, ಅದೇ ಪಥ
ಪ್ರೇಮಕ್ಕಿಲ್ಲ ಆಪತ್ತು!!





## ೩೩. ಬಿನ್ನಹ

ಓ ವನದೇವತೆ
ನನ್ನೀ ಪುಟ್ಟ ಪಾದಗಳು
ನಿನ್ನತ್ತಲೇ ಸಾಗುತ್ತಿವೆ

ಹಳ್ಳ ಕೊಳ್ಳ ಕಣಿವೆ
ಕಂದರಗಳ ದಾಟಿ
ನಿನ್ನತ್ತಲೇ ಸಾಗುತ್ತಿವೆ
ಬೆಟ್ಟ ಗುಡ್ಡವನೇರಿ
ಕಾಡತೊರೆಯ ಜಾಡು ಹಿಡಿದು
ನಿನ್ನತ್ತಲೇ ಸಾಗುತ್ತಿವೆ

ಆನೆ ಕರಡಿ ಜಿಂಕೆ ಮೊಲ
ಬೀರುತ್ತಿವೆ ಮುಗುಳುನಗೆ
ನೂರು ಕಣ್ಣುಗಳ ನವಿಲು
ನೋಡುತ್ತಿದೆ ನನ್ನತ್ತಲೇ

ಹೂಗೊಂಚಲು ತೂಗಿ
ಹಣ್ಣುಗಳು ಸಿಹಿಯಾಗಿ ಮಾಗಿ
ಬಾ ಎಂದು ಕರೆಯುತ್ತಿವೆ
ಕೋಗಿಲೆಯ ಕರೆ ತಾಗಿ
ಹಾರುತ್ತಿದೆ ಎದೆ
ಚಿಟ್ಟೆಯಾಗಿ...

ತೀರಿಸು ಕೊನೆಯಾಸೆ
ಕರುಣಿಸಿ ಕಂದನಿಗೆ
ನಿನ್ನ ತಾವಿನಲಿ ಚಿರನಿದ್ರೆ.

## ಇದೇ ಲೇಖಕಿಯ ಇತರ ಕೃತಿಗಳು

**ಕವನ ಸಂಕಲನಗಳು:**

ನಾ ಬರುತ್ತೇನೆ ಕೇಳು (೧೯೮೭)
ಚಂದ್ರನನ್ನು ಕರೆಯಿರಿ ಭೂಮಿಗೆ (೧೯೯೧)
ಹೊಳೆಮಗಳು (೧೯೯೬)
ಜಾತ್ರೆಯಲ್ಲಿ ಶಿವ (೨೦೦೨)
ದರುಶನ (೨೦೦೯)

**ಆಯ್ದ ಕವನಗಳ ಸಂಗ್ರಹಗಳು**

ಆಕಾಶ ಮಲ್ಲಿಗೆ (೨೦೦೦)
ಕಾಡುಲಿಲ್ಲಿ ಹೂಗಳು (೨೦೦೬)
ಹಳ್ಳಿಯ ದಾರಿ (೨೦೧೧)

**ಕಾದಂಬರಿ**

ಸ್ತ್ರೀಲೋಕ (೧೯೯೬)

**ಗದ್ಯ ಸಂಗ್ರಹ:**

ಹೂ ಮನಸ್ಸಿನ ಹೋರಾಟಗಾರ ಮತ್ತು ಇತರ ಲೇಖನಗಳು (೨೦೧೧)

**ಸಂಪಾದನೆ:**

ಮುಡಿಮಲ್ಲಿಗೆ (ಕನ್ನಡ ಮಹಿಳಾ ಸಾಹಿತ್ಯ ಸ್ಪಂದನ-೧೯೯೨)
ಕವಿತೆ-೧೯೯೭ (ಕರ್ನಾಟಕ ಸಾಹಿತ್ಯ ಅಕಾಡೆಮಿಗಾಗಿ)

**ಸಹ ಸಂಪಾದನೆ**

ಹಣತೆ: ಜಿಎಸ್ಸೆಸ್ ಅಭಿನಂದನಾ ಗ್ರಂಥ (೨೦೦೦)
ಸುವರ್ಣ ಕಾವ್ಯ (ಕನ್ನಡ ಮತ್ತು ಸಂಸ್ಕೃತಿ ಇಲಾಖೆಗಾಗಿ)-೨೦೦೬



ಕರುಣಾಳು

ಕಸದ ತೊಟ್ಟಿಯಲಿ ಹಸುಗೂಸು
ಇನ್ನೂ ಇನ್ನೂ
ಹರಿದಂತಿಲ್ಲ ತಾಯಮಾಸು

ಜನಸಂದಣಿಯನು ತೂರಿ
ನಿಡಿದಾದ ತೋಳುಗಳ ಚಾಚಿ
ಬಾಚಿದಳು ಮಿಷನ್ ಆಸ್ಪತ್ರೆಯ ಮೇರಿ
ಗುಸಗುಸ ಪಿಸಪಿಸ
ಅವಳಿನ್ನೂ ಕುಮಾರಿ!

ಮುದ್ದನುಕ್ಕಿಸುತಿದೆ ಹಸುಗೂಸು
ಸಂಶಯವೇ ಇಲ್ಲ ಬಾಲಯೇಸು
ಕಂಡಳು, ಎತ್ತಿಕೊಂಡಳು
ಎದೆಗೆ ಒತ್ತಿಕೊಂಡಳು
ತಾಯಿ ಅವಳು ಕರುಣಾಳು.





ಅಕ್ಷರ ಪ್ರಕಾಶನ
www.aksharaprakashana.com